…ರ …ಟ್—ಬರಹ ೧.

# …ಟ್ಟಿನ ರಾಜ್ಯಪದ್ಧತಿ.



…ರು:— ಕುಲಕರ್ಣಿ ನಾ…ರಾಯಣರಾ…ರು.

ಎಂ. ಎ. ಎಲ್. ಎಲ್. ಬಿ.

ಬೆಲೆ—೬ ಪೈ ಮಾತ್ರ.

# ಮುನ್ನುಡಿ.

ಇದೇ ಮೊನ್ನಿನ ಯುಗಾದಿಗೆ ಹೊರಟ ಕಿರಿಯರ ಕ ... ಗಳಿವು, ಈ ... ಕ್ಕೆ ... ಪ್ರಿಯ
ಪುಸ್ತಕ ರೂಪದಿಂದ ಮೊದಲನೆಯ ಹೆಜ್ಜೆಯನ್ನಿಟ್ಟಿದೆ. ಆದ ... ನ್ನು ... ಗರನ್ನೇ
ಕೊಟ್ಟು ಮುಂದಕ್ಕೊಯ್ಯುವದು ಸದಭಿಮಾನಿಗಳಾದ ಕ ...
ಕೂಡಿದೆ.

... ದ ವಿಚಾರಗ
ಕರ್ನಾಟಕದೊಳಗಿನ ಹಳ್ಳಿಗರಲ್ಲೆಲ್ಲ ಹೊಸಯುಗ ... ನಡಾವಳಿಗಳನ್ನು
ಳನ್ನು ಹಬ್ಬಿಸಿ, ಉಚಿತವಾದ ಹೊಸ ಹೊಸ ರೀತಿ ... ಯ ಹೆಗ್ಗುರಿಯು.
ಅವರು ಅನುಸರಿಸುವಂತೆ ಯತ್ನಿಸುವದೇ ಈ ಸಂಸ್ಥೆ ... ಮಾಲೆಗಳನ್ನು
ಚಿಕ್ಕ ಹೊತ್ತಿಗೆಗಳನ್ನು ಹೊರಡಿಸಿಯೂ, ವ್ಯಾಖ್ಯಾನ ... ಇದಕ್ಕೆ ಆಸಂದ.
ಏರ್ಪಡಿಸಿಯೂ, ಜ್ಞಾನವನ್ನು ಹಬ್ಬಿಸುವದರಲ್ಲಿಯೇ ...

... ಟ್ಟಿದೆ. ... ಸದ್ಯಕ್ಕೆ
ಅದಕ್ಕನುಗುಣವಾಗಿ ಈ ಬರಹವು ಬರೆಯ ... ಬಹು ಮಹತ್ವದಾ
ನಮ್ಮ ನಾಡಿನ ಭಾವೀ ರಾಜ್ಯಪದ್ಧತಿಯ ಪ್ರಶ್ನೆಯು ... ಪ್ರಕಟಿಸಿದುದ
ಗಿದೆ. ಎಂತೆಯೇ ಕಿರಿಯರ ಕೂಟದವರು ಇದನ್ನು ... ಯವರ ಚಿತ್ರವು
ರಾಜ್ಯಘಟನೆಯ ಆಚಾರ್ಯರಾದ ಮೋತೀಲಾಲ ...
ಇದನ್ನಲಂಕರಿಸಿರುವದೂ ಇದಕ್ಕಾಗಿಯೇ.

... ಯಣರಾವ
ಪುಸ್ತಕವನ್ನು ಬರೆದುಕೊಟ್ಟದ್ದಕ್ಕಾಗಿ ಶ್ರೀ. ನಾರ ... ಟ್ಟ ಸಹಾಯ
ರನ್ನು ಅಭಿನಂದಿಸುವೆವು. ಮತ್ತು ಎಲ್ಲರೂ ತಮ್ಮಿಂದಾದಷ ...
ವನ್ನು ಮಾಡುವರೆಂದು ನೆರೆನಂಬಿದ್ದೇವೆ.

... ಗಳು.
ಕಾರ್ಯದರ್ಶಿ

---




# ಒಕ್ಕಟ್ಟಿನ ರಾಜ್ಯಪದ್ಧತಿ.

## ೧.

'ಫೆಡರಲ್' ಎಂದರೆ ಸಂಯುಕ್ತ ರಾಜ್ಯಪದ್ಧತಿಯೇ ಹಿಂದುಸ್ಥಾನದ ಸ್ಥಿತಿಗತಿಗಳಿಗೆ ಒಪ್ಪುವಂತಹದಿರುವದೆಂದು ಸೈಮನ್ನ ಕಮಿಶನದವರು ಅಭಿಪ್ರಾಯಪಟ್ಟರು. ದುಂಡುಮೇಜಿನ ಪರಿಷತ್ತಿನವರಿಗೂ ಆ ಮಾತು ಮನಸಿಗೆ ಬಂತು. ಕಾಂಗ್ರೆಸ ಪಕ್ಷದ ಹಿರಿಯರಾದ ಮಹಾತ್ಮಾ ಗಾಂಧಿಯವರೂ ಕೂಡ ಈ ತರದ ರಾಜ್ಯಪದ್ಧತಿಗೆ ತಮ್ಮ ಬೆಂಬಲವನ್ನು ಕೊಟ್ಟು, ಸರಕಾರದವರೊಡನೆ ಗೆಳೆತನ ಮಾಡಿಕೊಂಡರು. ಎಂದರೆ ಇನ್ನು ಮುಂದೆ ನಮ್ಮ ದೇಶದಲ್ಲಿ ಬರಲಿರುವ ರಾಜ್ಯವ್ಯವಸ್ಥೆಯು 'ಸಂಯುಕ್ತ'ವೆಂದರೆ 'ಒಕ್ಕಟ್ಟಿ'ನ ಮಾದರಿಯದಾಗುವದೆಂಬದರಲ್ಲಿ ಸಂಶಯವೇ ಇಲ್ಲ. ಆದುದರಿಂದ ಒಕ್ಕಟ್ಟಿನ ರಾಜ್ಯಪದ್ಧತಿಯೆಂದರೇನು? ಅದರ ಮುಖ್ಯ ತತ್ವಗಳಾವು? ಅದೆ ನಮ್ಮ ದೇಶಕ್ಕೆ ಏಕೆ ವಿಹಿತವಾಗುತ್ತದೆ? ಅದರ ರೂಪರೆಷೆಗಳೇನು? ಅದರಿಂದ ಜನರ ಕೈಯೊಳಗೆ ಯಾವ ತರದ ಅಧಿಕಾರವು ಬಂದಂತಾಗುತ್ತದೆ? ಜನರು ಆ ಸಭೆಗೆ ಆರಿಸಿ ಕಳಿಸಬೇಕಾದ ಪ್ರತಿನಿಧಿಗಳು ಯಾವ ಯೋಗ್ಯತೆಯವರಿರಬೇಕು? ಎಂಬಿವೇ ಮೊದಲಾದ ಮಾತುಗಳನ್ನು ನನ್ನ ಹಳ್ಳಿಯ ಅಣ್ಣತಮ್ಮಂದಿರಿಗೆ ಆದಷ್ಟು ಸುಲಭ ರೀತಿಯಿಂದ ತಿಳಿಸಿಕೊಡಬೇಕೆಂದು ನಾನು ಈ ಚಿಕ್ಕ ಬರಹವನ್ನು ಬರೆದಿದ್ದೇನೆ. ಯಾಕೆಂದರೆ ಮುಂದಿನ ರಾಜ್ಯಭಾರವೆಲ್ಲ ಹೀಗೆ ಪ್ರತಿನಿಧಿಗಳನ್ನು ಆರಿಸುವ ಹಳ್ಳಿಯ ಮತದಾರರ ಮೇಲೆಯೇ ಅವಲಂಬಿಸಿದೆ. ಇಷ್ಟೇ ಅಲ್ಲ; ಹಳ್ಳಿಯವರೇ ನಮ್ಮ ದೇಶದ ಜೀವ; ಅವರೇ ನಮ್ಮ ಏಳಿಗೆಯ ಮೂಲ; ಅವರ ಹಿತವೇ ದೇಶಹಿತ; ಅವರ ಜೀವನವೇ ನಾಡಿನ ಜೀವನ; ಮತ್ತು 'ಸಂಯುಕ್ತ' ಹಿಂದುಸ್ಥಾನವು ನಾಳೆ ಚೆನ್ನಾಟವಾಡಬೇಕಾಗಿರುವದೂ ಈ ಹಳ್ಳಿಗಳಲ್ಲಿಯೇ ಬಹಳೇನು? ಹಳ್ಳಿ ಮತ್ತು ಹಳ್ಳಿಯವರೆಂದರೇ ನಮ್ಮ ನಾಡು, ಮತ್ತು ನಮ್ಮ ನಾಡೆಂದರೆ ಹಳ್ಳಿ ಹಾಗೂ ಹಳ್ಳಿಯವರು ಎಂದು ಹೇಳಬಹುದು.

320
NAR
111392



ತೀರ ಸುಲಭವಾದುದೊಂದು ಉದಾಹರಣೆಯಿಂದ ಹೊರಟರೆ, ಒಕ್ಕಟ್ಟಿನ ಮಾದರಿಯು ಇಂಗಿತವು ನಿಮಗೆ ಸಹಜವಾಗಿಯೇ ತಿಳಿಯಬಹುದು. 'ಕುಟುಂಬ' ಅಥವಾ 'ಮನೆತನ' ವೆಂದರೇನೆಂಬುವದು ಎಲ್ಲರಿಗೂ ಗೊತ್ತಿದ್ದ ಮಾತು. ನನ್ನ ಹಳ್ಳಿಯ ಗೆಳೆಯನಂತೂ ಅದನ್ನು ಚೆನ್ನಾಗಿಯೇ ಬಲ್ಲನು. ಒಬ್ಬನೇ ಹಿರಿಯನಿಂದ ಹುಟ್ಟಿಬೆಳೆದ ಹಿರಿಕಿರಿಯರೆಲ್ಲ ಕೂಡಿ ಒಂದೇ ಕಡೆಗೆ ಇರಹತ್ತಿದರೆಂದರೆ, ಅದನ್ನು ನಾವು 'ಮನೆತನ' ವೆಂದು ಕರೆಯುತ್ತೇವೆ. ಮೂಲಹಿರಿಯನು, ಅವನ ಗಂಡುಮಕ್ಕಳು, ಮೊಮ್ಮಕ್ಕಳು, ಮದವೆಯಾಗದ ಹೆಣ್ಣುಮಕ್ಕಳು, ಗಂಡುಮಕ್ಕಳ ಹೆಂಡಂದಿರು—ಇವರೇ ಮೊದಲಾದವರು ಕೂಡಿ ಆ ಮನೆತನವಾಗಿರುತ್ತದೆ. ಒಂದೊಂದು ಮನೆತನದಲ್ಲಿ ಬೇಕಾದಷ್ಟು ಜನರಿರಬಹುದು. ಇಂತಹ ಒಂದು ಮನೆತನಗಲ್ಲಿ ಸುಮಾರು ೧೫ ಮಂದಿ ವಯಸ್ಸಿಗೆ ಬಂದ ಗಂಡಸರಿರುವರೆಂದು ತಿಳಿಯೋಣ, ಅವರೆಲ್ಲರೂ ತಮತಮಗೆ ಬೇಕಾದ ಬೇರೆಬೇರೆ ಹೋರೆಗಳನ್ನು ನಡಿಸುತ್ತಿರುವರು ಒಬ್ಬನು ಒಕ್ಕಲತನವನ್ನು ಮಾಡುತಾನೆ; ಒಬ್ಬನು ಹುಡುಗರ ಶಿಕ್ಷಣವನ್ನು ನೋಡಿಕೊಳ್ಳುತಾನೆ; ಬೇರೊಬ್ಬನು ಮನೆಯವರೆಲ್ಲರ ಆರೋಗ್ಯವನ್ನು ಕಾಪಾಡುತ್ತಾನೆ; ಇನ್ನೊಬ್ಬನು ನೆರೆಹೊರೆಯವರ ಸಂಗಡಲೂ, ಮನೆಗೆ ಬರು ಹೋಗುವವರ ಸಂಗಡಲೂ ತಾವು ಹೇಗೆ ನಡೆಯಬೇಕೆಂಬದನ್ನು ಗೊತ್ತು ಪಡಿಸುವನು ಮತ್ತೊಬ್ಬನು ಮನೆಯೊಳಗಿನ ವ್ಯವಸ್ಥೆಯನ್ನೆಲ್ಲ ಚನ್ನಾಗಿ ಸಾಗಿಸಿಕೊಂಡು ಹೋಗುವನು; ಎಂದರೆ ಮನೆತನದೊಳಗೇ ಜಗಳ ಬರದಂತೆ ಎಲ್ಲರನ್ನು ಸರಿಯಾಗಿ ಕಾಯ್ದಿಡುವನು. ಯಾರಾದರೂ ತಪ್ಪು ಮಾಡಿದರೆ ಅವರನ್ನು ದಂಡಿಸಿ, ಎಲ್ಲರಿಗೂ ನ್ಯಾಯದೊರೆತು, ಮನೆಯೊಳಗೆ ಶಾಂತತೆಯಾಗುವಂತೆ ಕಟ್ಟು ಮಾಡುವನು; ಮತ್ತು ಕೆಲವರು ಕಳ್ಳರಿಂದಲೂ, ಮತ್ತು ಉಳಿದ ಬೇರೆ ಜನರಿಂದಲೂ, ತನ್ನ ಮನೆತನಕ್ಕೆ ಅಪಾಯವಾಗದಂತೆಯೂ ಹಾಗೆ ಮೈಮೇಲೇರಿ ಬಂದವರನ್ನು ಹಿಂದಕ್ಕೆ ಗಬ್ಬುತ್ತಲೂ, ತನ್ನ ಕೆಲಸವನ್ನು ಮಾಡಿಸುವನು. ಇನ್ನೊಬ್ಬನು ತಮ್ಮ ಮನೆಯ ಗೋಡೆ ಮೊದಲಾದವುಗಳು ಗಟ್ಟಿಯಾಗಿರುವಂತೆ ನೋಡಿಕೊಂಡು, ಹೊಲಗಳಲ್ಲಿ ಅವಶ್ಯವಿದ್ದ ದಾರಿ, ಕೆರೆ, ಭಾವಿಮೊದಲಾದವುಗಳನ್ನು ಸರಿಯಾಗಿ ಏರ್ಪಡಿಸುವನು, ಮತ್ತು ಒಬ್ಬನು ಖಜೀನೆಯ ಮೇಲಿದ್ದು ತನ್ನ ಮನೆತನದ

ಆಯವ್ಯಯಗಳೆರಡೂ ಕೂಡುವಂತೆ ಎಚ್ಚರಪಡುವನು, ಇವರೆಲ್ಲರ ಮೇಲೂ ಹಿರಿಯನೊಬ್ಬನಿದ್ದು ಅವರೆಲ್ಲರೂ ಒಂದೇ ಮನದಿಂದ ಕೂಡಿ ನಡೆಯು ವಂತೆ ಸಾಮಾನ್ಯ ವ್ಯವಸ್ಥೆಯನ್ನಿಡುವನು. ಹೀಗೆ ಒಟ್ಟಿನ ಮೇಲೆ ಆ ಮನೆತನದ ವ್ಯವಸ್ಥೆಯಿದ್ದರೆ, ಆ ಮನೆತನವು ಒಳ್ಳೆ ಸ್ಥಿತಿಯಲ್ಲಿರುವದೆಂದು ನಾವು ಹೇಳುತ್ತೇವೆ. ಈ ಗಂಡಸರೆಲ್ಲ ತಮ್ಮತಮ್ಮ ಕೆಲಸವನ್ನು ಸರಿಯಾಗಿ ಮಾಡುತ್ತಿದ್ದರೆ ಮಾತ್ರ ಆ ಮನೆತನದ ಸುದೈವ; ಇಲ್ಲದಿದ್ದರೆ ಅವರೊಳಗಿನ ತಾಳತಪ್ಪಿ, ಆ ಕುಟುಂಬದ ದುರ್ದೆಸೆಗೆ ಸುರುವಾಗುವ ದೆಂಬದರಲ್ಲಿ ಸಂಶಯವಿಲ್ಲ.

ಇಂತಹ ಹಲವು ಮನೆತನಗಳು ಕೂಡಿ, 'ಒಕ್ಕಟ್ಟಾಗಿ' ಒಂದೇ ರೀತಿಯಿಂದ ಹೊಂದಿಕೆಯಾಗುವಂತೆ ನಡೆಯು ಹತ್ತಿದವೆಂದರೆ ಅದೇ ಒಂದು ಹಳ್ಳಿಯಾಗುವದು. ಈ ಹಳ್ಳಿಯ ವ್ಯವಸ್ಥೆಯನ್ನು ಮಾಡ ಬೇಕಾದರೆ ಆ ಬೇರೆಬೇರೆ ಮನೆತನಗಳೊಳಗಿಂದ ಒಬ್ಬೊಬ್ಬ ಜಾಣ ಮನುಷ್ಯನನ್ನು ಆರಿಸ ಬೇಕಾಗುವದು. ಹೀಗೆ ಪ್ರತಿಯೊಂದು ಮನೆತನವು ಆರಿಸಿ ಕಳಿಸಿಕೊಟ್ಟ ಪ್ರತಿನಿಧಿಗಳು, ಊರೊಳಗಿನ ಒಂದು ಪ್ರಮುಖಭಾಗ ದಲ್ಲಿ ಕೂಡಿ, ಹಳ್ಳಿಗೆ ಸಂಬಂಧಿಸಿದ ಎಲ್ಲ ಕೆಲಸಗಳನ್ನು ಚನ್ನಾಗಿ ನೋಡಿಕೊಂಡು ಹೋಗುವರು. ಎಂದರೆ ಆ ಊರಿನ ಹಿತವಾಗುತ್ತದೆ ಮತ್ತು ಊರವರು ಸುಖವನ್ನು ಅನುಭವಿಸ ಹತ್ತುತ್ತಾರೆ. ಆದರೆ ಪ್ರತಿಯೊಂದು ಮನೆತನದವರು ಆರಿಸಿ ಕಳಿಸಿದ ಪ್ರತಿನಿಧಿಗಳು ಸ್ವಾರ್ಥ ಸಾಧಕರೂ, ದುಷ್ಟರೂ ಇದ್ದುದಾದರೆ, ಅವರಿಂದ ಆ ಹಳ್ಳಿಯ ಹಿತವಾಗು ವದು ಶಕ್ಯವಿಲ್ಲ. ತಮ್ಮ ಕೈಯೊಳಗಿನ ಅಧಿಕಾರದುಡ್ಡುಗಳನ್ನೆಲ್ಲ ಅವರು ತಮ್ಮ ಸ್ವಾರ್ಥಕ್ಕಾಗಿ ಹಾಳುಮಾಡಿಕೊಂಡು, ಆ ಹಳ್ಳಿಯನ್ನು ಹೀನದೆಸೆಗೆ ತರುತ್ತಾರೆ. ಎಂದಮೇಲೆ ಆ 'ಒಕ್ಕಟ್ಟಿ'ನ ಗ್ರಾಮಸಭೆಗೆ ಪ್ರತಿನಿಧಿಗಳನ್ನು ಆರಿಸಬೇಕಾದರೆ, ಆ ಆ ಮನೆತನದವರು ಎಷ್ಟು ಜಾಗರೂಕರಾಗಿರ ಬೇಕೆಂಬುವದು ತಿಳಿಯುವಂತಿದೆ.

ಹೀಗೆ ಹಲವು 'ಸ್ವತಂತ್ರ' ಮನೆತನಗಳು ಕೂಡಿ 'ಒಕ್ಕಟ್ಟಾಗಿ' ಕೆಲಸ ಮಾಡಹತ್ತಿದವೆಂದರೆ ಒಂದು ಸುವ್ಯವಸ್ಥಿತವಾದ ಹಳ್ಳಿಯಾಗುವ

ದೆಂಬದು ಮೇಲಿನ ಮಾತಿನಿಂದ ಸ್ಪಷ್ಟವಾದಂತಾಯಿತು. ಇದೇ ಮಾತನ್ನೇ ತುಸು ಬೇರೆ ದೃಷ್ಟಿಯಿಂದ ವಿಚಾರ ಮಾಡಿದರೆ, ಹಿಂದುಸ್ಥಾನದ ಒಕ್ಕಟ್ಟಿನ ರಾಜ್ಯಪದ್ಧತಿಯಾಗುತ್ತದೆಂದು ಹೇಳಬಹುದು. ಸ್ವತಂತ್ರವಾದ ಕೆಲವು ಚಿಕ್ಕಚಿಕ್ಕ ಪ್ರಾಂತಗಳು ಕೂಡಿ ಒಂದು ಸಂಯುಕ್ತ ರಾಷ್ಟ್ರವಾದರೆ ಅದಕ್ಕೆ 'ಒಕ್ಕಟ್ಟಿನ' ನಾಡೆಂದು ಕರೆಯುಬಹುದು. ಈಗ ಅಮೇರಿಕೆಯಲ್ಲಿರುವ ದೇಶವು ಹೀಗೆ ಹಲವು ಸ್ವತಂತ್ರವಾದ ಪ್ರಾಂತಗಳಿಂದಲೇ ಉಂಟಾಗಿರುವದು. ಎಂತೆಯೇ ಅದಕ್ಕೆ 'ಯುನೈಟೆಡ್ ಸ್ಟೇಟ್ಸ್ ಆಫ ಅಮೇರಿಕಾ' ಎಂದರೆ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳೆಂದು ಹೆಸರು ಬಂದಿದೆ.

೨.

ಇಲ್ಲಿ ನಿಮಗೆ ಒಂದು ಸಂಶಯವು ಬರುವಂತಿದೆ:—ಸ್ವತಂತ್ರವಾದ ಬೇರೆಬೇರೆ ಪ್ರಾಂತಗಳು ಹೀಗೆ ಒಂದಾಗಿ ಕೂಡಿಕೊಳ್ಳುವದಕ್ಕೆ ಕಾರಣವೇನು? ಅವು ತಮ್ಮಷ್ಟಕ್ಕೆ ತಾವೇ ಬೇರೆಯಾಗಿದ್ದರೆ, ಅವುಗಳಿಗಾಗುವ ಹಾನಿಯೇನು? ಎಂದು ನೀವು ಕೇಳಬಹುದು. ಇದಕ್ಕೆ ಉತ್ತರವೆಂದು "ಮುದುಕನೂ ಅವನ ಮಕ್ಕಳೂ" ಎಂಬ ಕಥೆಯನ್ನು ಹೇಳಬಹುದು. ಒಬ್ಬ ಮುದುಕನಿಗೆ ಮೂರು ಮಂದಿ ಮಕ್ಕಳಿದ್ದರು. ಅವರು ದಿನಾಲೂ ತಮ್ಮತಮ್ಮೊಳಗೆ ಬಡಿದಾಡುತಿದ್ದರು. ಒಂದು ದಿನವಾದರೂ ಅವರು ಪ್ರೀತಿಯಿಂದ ಕೂಡಿ ನಡೆಯುತ್ತಿರಲಿಲ್ಲ. ಇವರ ಜಗಳದಿಂದ ಆ ಮುದುಕನು ಬೇಸತ್ತು ಹೋದನು. ಚಿಂತೆಯಿಂದ ಆ ಮುದುಕನ ಮರಣಕಾಲವೂ ತೀವ್ರನೇ ಸಮೀಪಿಸಿತು. ಮುದುಕನ ಮನಸಿಗೊಂದು ಹಂಚಿಕೆಯು ಹೊಳೆಯಿತು. ಅವನು ಒಬ್ಬ ಮಗನನ್ನು ಹತ್ತರ ಕರೆದು:—"ಅಪ್ಪಾ, ಅಲ್ಲಿ ಬಿದ್ದಿರುವ ಕಟ್ಟಿಗೆಗಳನ್ನು ಕೂಡಿಸಿ ಒಂದು ಹೊರೆಯನ್ನು ಕಟ್ಟುವಿಯಾ? ಎಂದರೆ ನನ್ನ ಮನಸು ತಣ್ಣಗಾಗುವದು, ನೋಡು" ಎಂದು ಹೇಳಿದನು. ಸಾಯಲಿರುವ ತಂದೆಯ ಮಾತನ್ನು ಮೀರುವದು ಆ ಮಗನಿಗೆ ಸರಿಬರಲಿಲ್ಲ. ಅವನು ಆ ಕಟ್ಟಿಗೆಯ ತುಂಡುಗಳನ್ನೆಲ್ಲ ಕೂಡಿಸಿ ಒಂದು ಒಳ್ಳೇ ಗಟ್ಟಿ ಮುಟ್ಟಾದ ಹೊರೆಯನ್ನು ಕಟ್ಟಿದನು. ಆ ಮೇಲೆ ಮುದುಕನು ತನ್ನ ಉಳಿದ ಮಕ್ಕಳನ್ನೂ ಕರೆದು:—ಈ ಹೊರೆಯನ್ನು ಯಾರು ಮುರಿಯುವರೋ ನೋಡೋಣ! ಹೊರೆಯನ್ನು

ಮುಗಿಸುವರಿಗೆ ನನ್ನ ಕಡೆಯ ಇನಾಮು." ಎಂದು ಅವರನ್ನು ಹುರಿದುಂಬಿಸಿದನು. ತಂದೆಯು ಏನು ಗಳಿಸಿಟ್ಟಿರುವನೋ, ಎಂದು ಮಕ್ಕಳಿಗೆ ಬಲು ಹುರುಪು ಬಂತು. ನಾಮುಂದೆ, ನೀಮುಂದೆ, ಎಂದು ಅವರು ಕಟ್ಟಿಗೆಯ ಹೊರೆಯನ್ನು ಮುರಿಯಲೆಣಿಸಿದರು. ಆದರೆ ಅವರು ಎಷ್ಟೆಷ್ಟೋ ತಿಣುಕಾಡಿ, ಎಷ್ಟೆಷ್ಟೋ ಶ್ರಮಬಟ್ಟರೂ, ಆ ಹೊರೆಯೇನೂ ಅವರಿಗೆ ಅಣಿಯಲಿಲ್ಲ. ಕಡೆಗೆ ನಿರಾಶರಾಗಿ:—"ಅಪ್ಪಾ, ಈ ಕೆಲಸವು ನಮ್ಮಿಂದಾಗಲಾರದು" ಎಂದು ಉಸುರುಗಳೆದು ಕುಳಿತುಕೊಂಡರು. ಜಾಣನಾದ ತಂದೆಯು:—"ನನ್ನ ಮುದ್ದು ಮಕ್ಕಳಿರಾ! ಆಗಲಿ. ಆ ಹೊರೆಯನ್ನು ಬಿಚ್ಚಿ, ಆ ಕಟ್ಟಿಗೆಗಳನ್ನು ಒಂದೊಂದಾಗಿ ಮುರಿದು ಬಿಡಿರಿ, ನೋಡೋಣ." ಎಂದು ಹೇಳಿದನು. ಕ್ಷಣವೊಂದರಲ್ಲಿ ಕಟ್ಟಿಗೆಗಳೆಲ್ಲ ತುಂಡಾಗಿ ಬಿದ್ದವು. ಇನ್ನು ಇನಾಮು ಸಿಗುವದೆಂದು ಮಕ್ಕಳು ಹಿಗ್ಗಿದರು, ಮುದುಕನೂ ನಗೆಮೊಗದಿಂದ ಮಕ್ಕಳನ್ನು ತನ್ನ ಸಮೀಪಕ್ಕೆ ಕರೆದು:— "ಅಪ್ಪಗಳಿರಾ, ನಾನು ಕೊಡಬೇಕೆಂದಿದ್ದ ಕಡೆಯ ಇನಾಮು ಇದೇ. ಆ ಕಟ್ಟಿಗೆಯ ತುಂಡುಗಳು ಒಂದಾಗಿ ಕೂಡಿಕೊಂಡಾಗ ಅವು ಯಾರಿಗೂ ಹಣಿಯಲಿಲ್ಲ. ಆದರೆ ಅದೇ ಬೇರೆಬೇರೆ ಯಾದೊಡನೆ ನಿಮ್ಮ ಕಸುವಿಗೆ ಹಣ್ಣಾಗಿ ಹೋದವು. ಅದರಂತೆಯೇ ನೀವಾದರೂ ಕೂಡಿಕೊಂಡಿದ್ದರೆ ನಿಮ್ಮನ್ನು ಯಾರೂ ಕೆಣಕಲಾರರು. ಬಡಿದಾಡಿ ಬೇರೆಯಾದರೆ ಮಾತ್ರ ನಿಮ್ಮ ದುರ್ದೆಸೆಗೆ ವಿಲಂಬವಿಲ್ಲ. ನಿಮ್ಮ ಒಕ್ಕಟ್ಟೇಬಲವು; ಭೇದವೇ ಬಲಹೀನತೆಯು." ಎಂದು ಹೇಳಲು, ಮಕ್ಕಳು ಆ ಮಾತಿಗೆ ತಲೆದೂಗಿದರು. "ನಾವು ಇನ್ನೆಂದಿಗೂ ಜಗಳಾಡುವದಿಲ್ಲೆಂದು" ಅವರು ಅಂದೇ ಆಣೆಯಿಟ್ಟುಕೊಂಡರು. ಮುದುಕನು ಆನಂದದಿಂದ ಪ್ರಾಣಬಿಟ್ಟನು.

ನಮ್ಮ ನಾಡಿನಲ್ಲಿ ಮುಂಬಯಿ, ಮದ್ರಾಸ, ಬಂಗಾಲ, ಮಧ್ಯಪ್ರಾಂತ, ಸಂಯುಕ್ತಪ್ರಾಂತ, ಬಿಹಾರ, ಓರಿಸಾ, ಪಂಜಾಬ, ಕಾಶ್ಮೀರ, ರಜಪೂತಸ್ಥಾನ, ಹೈದರಾಬಾದ, ಮೈಸೂರು ಮೊದಲಾದ ಬೇರೆಬೇರೆ ಭಾಗಗಳಿರುವವಷ್ಟೇ? ಎಂದರೆ ಇಂಗ್ಲಿಷರವಶದಲ್ಲಿರುವ 'ಬ್ರಿಟಿಷ ಹಿಂದುಸ್ಥಾನ'ದಲ್ಲಿ ೮-೯ ಪ್ರಾಂತಗಳೂ, ಸಂಸ್ಥಾನಿಕರ ವಶದಲ್ಲಿರುವ ಏಳೆಂಟು ದೊಡ್ಡ ಸಂಸ್ಥಾನಗಳೂ ಇರುವವಷ್ಟೇ? ಇವೆಲ್ಲ ಭಾಗಗಳು ತಮ್ಮಷ್ಟಕ್ಕೆ

ತಾವೇ ಸ್ವತಂತ್ರವಾದರೆ, ಅವು ಬಲಹೀನವಾಗುವವೆಂಬುದು, ಮೆಲಿನ ಕಥೆ ಯಿಂದ ನಿಮಗೆ ಮನದಟ್ಟಾಗಿರ ಬಹುದು. ಇವೆಲ್ಲ ಪ್ರಾಂತಗಳ ಉತ್ಪನ್ನ ವೂಕಡಿಮೆ; ಜನಸಂಖ್ಯೆಯೂ ಕಡಿಮೆ. ಆದುದರಿಂದ ಬೇರೆಬೇರೆಯಾಗಿ ಸ್ವತಂತ್ರ ನಾಡುಗಳಾದರೆ, ಅವು ಬಹುದಿವಸ ಬಾಳಲಾರವೆಂಬದು ಸ್ಪಷ್ಟ ವಿದೆ. ಮತ್ತು ಹಿಂದುಸ್ತಾನವು ಅನಾದಿ ಕಾಲದಿಂದಲೂ ಒಂದೇ ನಾಡಾಗಿ ರುವದೆಂಬದನ್ನು ನಾವು ಮರೆಯ ಬಾರದು. ನಮ್ಮ ದೇಶದ ನಕಾಶವನ್ನು ನೋಡಿದರೆ ಮೂರುಕಡಿಗೆ ಸಮುದ್ರ, ಒಂದು ಕಡೆಗೆ ಘನವಾದ ಪರ್ವತದ ಸಾಲುಗಳು—ಹೀಗೆ ಇಡೀ ಹಿಂದೂದೇಶವೇ ಒಂದೇ ನಾಡಾಗಿರಬೇಕೆಂಬ ದೇವರ ಸಂಕೇತವಿರುತ್ತದೆಂದು ಹೇಳಬಹುದು. ಮತ್ತು ಹಿಂದೂಜನರ ಸಂಸ್ಕೃತಿಯೂ ಒಂದು; ಧಾರ್ಮಿಕ ಒಲವೂ ಒಂದು; ರೀತಿ ನಡಾವಳಿಗಳೂ ಒಂದೇ. ಆದುದರಿಂದಲೇ ಬೇರೆಬೇರೆ ಪ್ರಾಂತಗಳೊಳಗಿನ ಜನರು ಒಬ್ಬರನ್ನೊಬ್ಬರು ಬಂಧುಗಳಂತೆಯೇ ನೋಡುತ್ತಾರೆ. ಎಂದ ಮೇಲೆ ಹಿಂದೂದೇಶವು ಕಡೆಯವರೆಗೂ ಒಂದೇ ನಾಡಾಗಿ ಉಳಿಯ ಬೇಕೆಂಬದು ನಿಮಗೆ ಸರಿಬರಲಿಕ್ಕಿಲ್ಲವೇ? ಮತ್ತು ಅದನ್ನು ಚಿಕ್ಕ ಚಿಕ್ಕ ತುಂಡುಗಳಲ್ಲಿ ಹಂಚಿಬಿಡುವದು ನಿಮ್ಮ ಮನಸಿಗೆ ಬರಬಹುದೇ? ನಾವೆಲ್ಲರೂ ಭಾರತೀ ಯರೇ ಅಲ್ಲವೇ? ಅದೇ ಹಿಮಾಲಯವೇ ನಮ್ಮೆಲ್ಲರಿಗೆ ಪೂಜ್ಯವಲ್ಲವೇ? ಅದೇ ಬದರೀ ನಾರಾಯಣ, ಅದೇ ಜಗನ್ನಾಥ, ಅದೇ ಅದೇ ವಿಶ್ವೇಶ್ವರ, ಅದೇ ರಾಮೇಶ್ವರಗಳೇ ನಾವು ಪುಜಿಸುವ ದೇವತೆಗಳಲ್ಲವೇ? ಅದೇ ಗಂಗೆ, ಅದೇ ಯಮುನೆ, ಅದೇ ಸಿಂಧು, ಅದೇ ಕೃಷ್ಣೆ, ಅದೇ ಗೊದಾವರಿ, ಅದೇ ಕಾವೇರಿಗಳಿಂದಲೇ ನಮ್ಮ ದೇಹವು ಪವಿತ್ರವಾಗುವದಿಲ್ಲವೇ? ಅದೇ ಅಯೋಧ್ಯೆ, ಅಧೇ ಮಥುರೆ, ಅದೇ ಕಾಂಚಿ, ಅದೇ ದ್ವಾರಕೆ, ಅದೇ ಕಾಶಿ, ಅದೇ ಪ್ರಯಾಗಗಳೇ ನಮ್ಮ ಯಾತ್ರಾಸ್ಥಳಗಳಲ್ಲವೇ? ಅದೇ ಶೀಖರು, ಅದೇ ರಜಪೂತರು, ಅದೇ ಮರಾಠರು, ಅದೇ ಕನ್ನಡಿಗರು, ಅದೇ ಬಂಗಾಳಿಗಳು ನಮ್ಮ ಬಂಧುಗಳಲ್ಲವೇ? ಎಂದಮೇಲೆ ಸ್ವಾಭಾ ವಿಕವಾಗಿಯೇ ಒಂದೇ ಒಂದಾಗಿರುವ ಹಿಂದುಸ್ತಾನವನ್ನು ತುಂಡು ತುಂಡಾಗಿ ಮಾಡಲೆಣಿಸುವ ಅಧಮರು ನಿಮ್ಮಲ್ಲಿರುವದು ಶಕ್ಯವಿದೆಯೆ?

ಎಂದಮೇಲೆ ಏಕಮುಖಿ (unitary) ಯಾದ ಒಂದೇ ರಾಷ್ಟ್ರ ವಿದ್ದರೆ ಆಗದೆ? ಬೇರೆಬೇರೆಯಾದ ಸ್ವತಂತ್ರ ಪ್ರಾಂತಗಳೇಕೆ ಬೇಕು?

ಎಂದು ನೀವು ಕೇಳಬಹುದು. ಅಹುದು. ನೀವನ್ನುವದು ಸರಿಯಡೆ. ಇಷ್ಟು ದಿನಗಳವರೆಗೆ ಇಲ್ಲಿ ನಡೆದುದು ಇಂತಹ ಏಕಮುಖ ಪದ್ಧತಿಯೇ ಆಗಿತ್ತು. ಈಗ್ಯು ಆ ಪದ್ಧತಿಯೇ ರೂಢಿಯಲ್ಲಿದೆ. ದಿಲ್ಲಿಯಲ್ಲಿರುವ ಗವರ್ನರ ಜನರಲನೊಬ್ಬನೇ ತನ್ನ ಸಭಾಸದರೊಡನೆ ಈ ಹಿಂದೂದೇಶ ವನ್ನೆಲ್ಲ ಆಳುತ್ತಿದ್ದಾನೆ. ಅವನಮೇಲೆ ಇಂಗ್ಲಡದಲ್ಲಿರುವ ಸ್ಟೇಟ-ಸೆಕ್ರೆಟರಿಯೊಬ್ಬನೇ ಈ ಎಲ್ಲ ದೇಶದ ಹಿತಾಹಿತಗಳನ್ನು ನೋಡುತಾನೆ. ಆದರೆ ಹಿಂದೂದೇಶವು ಬಲುದೊಡ್ಡದು. ಅದು ನಮ್ಮನ್ನಾಳುವ ಇಂಗ್ಲಿಷರ ಚಿಕ್ಕ ನಾಡಿನ ೧೫ ಪಟ್ಟನಷ್ಟು ದೊಡ್ಡದಾಗುವದೆಂಬ ಮಾತು ನಿಮಗೆ ಸೋಜಿಗವೆಂದು ತೋರಬಹುದು. ಹಿಂದೂಜನರ ಸಂಖ್ಯೆಯು ಇಡೀ ಜಗತ್ತಿನ ಮೇಲಿರುವ ಜನರ ಐದರೊಳಗೆ ಒಂದು ಹಿಸೆಯಷ್ಟಾಗುತ್ತದೆ. ಇಷ್ಟಾಗಿ ನಮ್ಮಲ್ಲಿ ಭಿನ್ನಭಿನ್ನ ಮತಗಳೂ, ಪಂಥಗಳೂ, ಭಾಷೆಗಳೂ, ಉಡಿಗೆ ತೊಡಿಗೆಗಳೂ ಇರುವವಷ್ಟೇ? ಎಂದಮೇಲೆ ಇವೆಲ್ಲ ಒಟ್ಟಾರೆಯಾಗಿ ಕೂಡುಬೀಳುವದಕ್ಕಿಂತ, ಸುವ್ಯವಸ್ಥಿತವಾಗಿ ಬೇರೆಬೇರೆ ಯಾದರೂ ಒಕ್ಕಟ್ಟಿನಿಂದ ನಡೆಯುವದು ವಿಹಿತವಾಗಲಿಕ್ಕಿಲ್ಲವೇ? ನಮ್ಮ ದೇಶದೊಳಗೆ ಸದ್ಯಕ್ಕೆ ರೂಢವಿದ್ದ ಪ್ರಾಂತಗಳು ಇನ್ನು ಮುಂದೆ ಬದಲಾಗ ತಕ್ಕವಿವೆ. ಆಯಾ ಜನರು ಆಡುವ ಭಾಷೆಗಳ ಮೇಲಿಂದ ಆಯಾ ಪ್ರಾಂತಗಳ ರಚನೆಯನ್ನು ಮಾಡಬೇಕೆಂಬದನ್ನು ಎಲ್ಲ ಮುಖಂಡರೂ ಒಪ್ಪಿಕೊಂಡಿದ್ದಾರೆ. ಹೀಗೆ ಪುನರ್‌ರಚನೆಯಾದರೆ ಗುಜರಾತ, ಮಹಾರಾಷ್ಟ್ರ, ಕರ್ನಾಟಕ, ಸಿಂಧ, ಆಂಧ್ರ, ಬಂಗಾಲ, ಪಂಜಾಬ ಇವೇ ಮೊದಲಾದ ಪ್ರಾಂತಗಳಾಗುತ್ತವೆ. ಹೀಗೆ ಬ್ರಿಟಿಷ ಹಿಂದುಸ್ತಾನದಲ್ಲಿ ಏಳೆಂಟು ಪ್ರಾಂತಗಳಾಗುವವು. ಮತ್ತು ಕಾಶ್ಮೀರ, ಮೈಸೂರು, ಹೈದರಾಬಾದ, ಗ್ವಾಲೀರ, ಬಡೋದಾ, ಮೊದಲಾದ ಮುಖ್ಯ ಸಂಸ್ಥಾನಗಳೂ, ಉಳಿದೆಲ್ಲ ಸಂಸ್ಥಾನಿಕರದೊಂದೆರಡು ಗುಂಪುಗಳೂ ಕೂಡಿ, ನಾನುಮೇಲೆ ಹೇಳಿದಂತೆ, ಬೇರೆಬೇರೆಯಾದ ಸ್ವತಂತ್ರ ಮನೆತನಗಳಾಗುವವು. ಹೀಗೆ ಒಟ್ಟಿಗೆ ನಮ್ಮ ಭಾವೀ ಒಕ್ಕಟ್ಟಿದ ಹಿಂದುಸಾನದಲ್ಲಿ ೧೫—೨೦ ಪ್ರಾಂತಗಳಾಗುವವು. ಅವೇ ಮನೆತನಗಳೆಂದು ತಿಳಿದರೆ, ಒಕ್ಕಟ್ಟಾದ ಹಿಂದುಸ್ತಾನವೇ ಅವೆಲ್ಲ ಮನೆತನಗಳು ಕೂಡಿ ಆಗುವ ಹಳ್ಳಿಯೆಂದು ಹೇಳಬಹುದು.

ಆದರೆ ಅವು ಒಕ್ಕಟ್ಟಾದರೂ ಅವುಗಳಲ್ಲಿ ಐಕ್ಯವಿರುವದಿಲ್ಲೆಂಬದನ್ನು ನಿವು ಲಕ್ಷದಲ್ಲಿಡಬೇಕು. ( There is union; but no unity ). ಎಂದರೆ ಅವೆಲ್ಲ ಕೂಡಿ ಏಕಮುಖವಾಗಲಾರವೆಂದು ಇದರ ಅರ್ಥವು. ವೈಷ್ಣವರು ಹೇಳುವಂತೆ ವೈಕುಂಠದಲ್ಲಿ ಎಲ್ಲ ಜೀವಗಳೂ ಒಂದೇ ಕಡೆಗೆ ಸೇರುವವು; ಆದರೆ ಅವು ಅದ್ವೈತದೊಳಗಿನಂತೆ ಒಂದೇ ಒಂದಾಗಲಾರವು. ಹಾಗೆಯೇ ಪ್ರಾಂತಗಳೆಲ್ಲ ಒಕ್ಕಟ್ಟಾಗಿ ಕೂಡಿಕೊಂಡರೂ ಅವು ತಮ್ಮ ವೈಯಕ್ತಿಕ ಅಸ್ತಿತ್ವವನ್ನು ಕಳೆದುಕೊಳ್ಳಲಾರವೆಂದು ಇದರ ಅರ್ಥವು. ಇರಲಿ. ಇದು ಕುಸು ಕಠಿಣವಾಗಿರುವದು. ಅದನ್ನು ನೀವು ಗಮನಿಸುವದು ಅಷ್ಟು ಆವಶ್ಯವು ಇಲ್ಲ.

೩.

ಆ ಆ ಮನೆತನಗಳು ಬೇರೆಬೇರೆಯಾಗಿ ಸ್ವತಂತ್ರವಾಗಿರುವವೆಂದು ನಾನು ಮೇಲೆ ಹೇಳಿದ್ದೇನೆ. ಅದರಂತೆಯೇ ಆ ೧೫—೨೦ ಪ್ರಾಂತಗಳು ಬೇರೆಬೇರೆಯಾಗಿ ಸ್ವತಂತ್ರವಾಗುವವು. ಎಂದರೆ ತಮ್ಮ ಮನೇತನದ ಒಳವ್ಯವಸ್ಥೆಯನ್ನು ಆ ಆ ಮನೆತನದ ಹಿರಿಯರೇ ನೋಡಿಕೊಳ್ಳುವಂತೆ, ಆ ಆ ಪ್ರಾಂತಗಳೊಳಗಿನ ವ್ಯವಸ್ಥೆಯನ್ನು ಆ ಆ ಪ್ರಾಂತಿಕ ಸರಕಾರಗಳೇ ಮಾಡುವವು. ಆದರೆ ಈಗ ನೀವು ಆರಿಸಿ ಕಳಿಸುವಂತೆ, ಇನ್ನು ಮುಂದಾದರೂ ಪ್ರಾಂತಿಕ ಪ್ರತಿನಿಧಿಗಳನ್ನು ಆರಿಸಿ ಕಳಿಸಬೇಕಾಗುವದು. ಕರ್ನಾಟಕವೊಂದು ಪ್ರಾಂತವಾದರೆ, ನೀವು ಆರಿಸಿದ ಪ್ರತಿನಿಧಿಗಳೆಲ್ಲ ಕರ್ನಾಟಕ ಪ್ರಾಂತಿಕ ಸಭೆಯಲ್ಲಿ ಕೂಡುವರು. ಮತ್ತು ನಮ್ಮ ಕರ್ನಾಟಕದ ರಾಜ್ಯಕಾರಭಾರಕ್ಕೆಲ್ಲ ಅವರೇ ಬಾಧ್ಯರು, ಅವರ ಮೇಲೆಯೇ ನಮ್ಮ ಕರ್ನಾಟಕದ ಹಿತಾಹಿತಗಳು ಅವಲಂಬಿಸಿರುವವು. ಮುಂದೆ ಅವರೇ ತಮ್ಮ ಪ್ರೆಸಿಡೆಂಟನೆಂದರೆ ಅಧ್ಯಕ್ಷನನ್ನು ಆರಿಸಿಕೊಂಡು, ಅವನ ಕಣ್ಣ ಕೆಳಗೆ ಕೆಲಸ ನಡೆಸುವರು. ಅವರೇ ಕಾಯಿದೆಗಳನ್ನು ಮಾಡತಕ್ಕವರು. ಅವರೆ ನಮ್ಮ ಮೇಲೆ ಬೇಕಾದ ಕರಗಳನ್ನು ಹೇರಿ, ಬೇಡಾದವುಗಳನ್ನು ತೆಗೆದೊಗೆಯತಕ್ಕವರು. ಅವರೆಲ್ಲರ ಮೇಲೆ ಗವರ್ನರನೆಂಬ ಸರಕಾರೀ ಅಧಿಕಾರಸ್ಥನಿರುವನು. ಹಲಕೆಲವು ಕೆಲಸಗಳಲ್ಲಿ ಆ ಗವರ್ನರನಿಗೆ

ಹೆಚ್ಚಿನ ಅಧಿಕಾರಗಳಿದ್ದರೂ, ಒಟ್ಟಿನಮೇಲೆ ಅವನೂ ಕೂಡ ನಮ್ಮ ಪ್ರತಿನಿಧಿಗಳ ಸಭೆಗೆ ಅನುಸರಿಸಿಯೇ ನಡೆಯಬೇಕಾಗುವದು.

ಮನೆತನದ ಒಳವ್ಯವಸ್ಥೆಯಲ್ಲಿ ೧೦--೧೫ ವಿಭಾಗಗಳಾಗುವವೆಂದು ಮೇಲೆ ಹೇಳಿದ್ದೇನೆ. ಅವೇ ನಮ್ಮ ಪ್ರಾಂತಿಕ ಸರಕಾರದಲ್ಲಿ ಖಾತೆಗಳಾಗುವವು. ಶಿಕ್ಷಣ, ಆರೋಗ್ಯ, ಸೈನ್ಯ, ಒಕ್ಕಲತನ, ಸಾಮಾಜಿಕ ಕೆಲಸಗಳ ಖಾತೆ ( P. W. D. ), ಪೋಲಿಸ ಖಾತೆ, ನ್ಯಾಯಖಾತೆ, ಮುಲಕೀಖಾತೆ, ಆರ್ಥಿಕಖಾತೆ (Finance) ಅಂತರ್ವ್ಯವಸ್ಥೆಯಖಾತೆ ಇವೇ ಮೊದಲಾದ ಬೇರೆಬೇರೆ ಖಾತೆಗಳನ್ನು ಏರ್ಪಡಿಸಿ ಆ ಆ ಕೆಲಸಗಳನ್ನು ಮಾಡಬೇಕಾಗುವದು. ಈ ಖಾತೆಗಳೆಲ್ಲ ನೀವು ಆರಿಸಿದ ಪ್ರತಿನಿಧಿಗಳಿಗೆ ವಿಶ್ವಾಸವಿದ್ದವರ ಕೈಯಲ್ಲಿಯೇ ಉಳಿಯುವವು. ಅವರಿಗೆ ಮಂತ್ರಿಗಳೆಂದು ಹೆಸರು. ಹೀಗೆ ಸುಮಾರು ೮-೧೦ ಮಂತ್ರಿಗಳಾಗಬಹುದು. ಒಬ್ಬೊಬ್ಬ ಮಂತ್ರಿಯ ಕೆಳಗೆ ಒಂದಾಗಲಿ ಎರಡಾಗಲಿ ಖಾತೆಗಳಿರುವವು. ಅವರೆಲ್ಲರ ಮೇಲೆ ಅಧ್ಯಕ್ಷನಿರುವನು. ಆವನ ಮೇಲೆ ಗವರ್ನರನಿರುವನು.

ನಿಮ್ಮ ಪ್ರತಿನಿಧಿಗಳ ಸಭೆಯು ರೈತರ ಹಿತಾಹಿತಗಳನ್ನು ವಿಚಾರಿಸಿ ಕಾಯದೆಗಳನ್ನು ಪಾಸು ಮಾಡುವದು. ಆ ಕಾಯದೆಗಳನ್ನು ಅಮಲಿನಲ್ಲಿ ತರುವವರು ಈ ಮಂತ್ರಿವರ್ಗದವರು. ಸಭೆಗೆ 'ನ್ಯಾಯವಿಧಾಯಕ' ವೆಂದು ಕರೆದರೆ, ಈ ಮಂತ್ರಿವರ್ಗಕ್ಕೆ 'ಕಾರ್ಯನಿರ್ವಾಹಕ' ವೆಂದು ಕರೆಯಬಹುದು. ಈ ರೀತಿಯಿಂದ ಹೊಸ ಕಾಯದೆಗಳು ಅಮಲಿನಲ್ಲಿ ಬರುವವು. ಉಳಿದುದೆಲ್ಲ ಈಗಿದ್ದಂತೆಯೇ ಇರುವದು. ಗೌಡಕುಲಕರ್ಣಿಯವರು, ಅವರಮೇಲೆ ಮಾಮಲೇದಾರ, ಪ್ರಾಂತಸಾಹೇಬ, ಕಲೆಕ್ಟರ, ಕಮಿಶನರ, ಗವರ್ನರ ಮೊದಲಾದ ಎಲ್ಲ ಅಧಿಕಾರಸ್ಥರೂ ಹಾಗೆಯೇ ಉಳಿಯಬಹುದು. ಆದರೆ ಮುಖ್ಯಮಾತೆಂದರೆ—ನೀವು ಆರಿಸಿ ಕಳಿಸಿದ ಪ್ರತಿನಿಧಿಗಳು ಹೇಳಿದ ಮಾತನ್ನು ಈ ಅಧಿಕಾರಸ್ಥರು ಕೇಳಲಿಕ್ಕೆಬೇಕು. ಇಷ್ಟು ದಿನಗಳವರೆಗೆ ಆ ಅಧಿಕಾರಸ್ಥರು ಹಾಗೆ ನಡೆಯುತ್ತಿರಲಿಲ್ಲ. ಮತ್ತು ನೀವು ಇಷ್ಟು ದಿವಸಗಳವರೆಗೆ ಬಡಿದಾಡಿದ ಸ್ವಾತಂತ್ರ್ಯಸಾರವೆಂದರೂ ಇದೇ. ಈ ಅಧಿಕಾರಸ್ಥರು ನಿಮ್ಮ ಸೇವಕರು. ನಿಮ್ಮ ತಲೆಯಮೇಲೆ ಮೆಣಸು

ಅರಿಯುವ ಗರ್ವಿಷ್ಠ ಅಧಿಕಾರಸ್ಥರಲ್ಲ. ಯಾಕೆಂದರೆ ಪ್ರತಿನಿಧಿಗಳನ್ನು ಆರಿಸುವವರು ನೀವು. ಆ ಪ್ರತಿನಿಧಿಗಳು ಹೇಳಿದಂತೆ ನಡೆಯುವವರು ಈ ಅಧಿಕಾರಸ್ಥರು. ಎಂದಮೇಲೆ, ಇನ್ನು ಮುಂದೆ ನಿಜವಾದ ಅಧಿಕಾರವು ನಿಮ್ಮ ಕೈಯೊಳಗೆ ಬಂದಂತಾಗಲಿಲ್ಲವೇ? ಆದುದರಿಂದ ನಿಮ್ಮ ಹಿತವನ್ನು ಸಾಧಿಸಿಕೊಳ್ಳುವದು ನಿಮ್ಮ ಕೈಯಲ್ಲಿಯೇ ಇದೆ. ನೀವು ಒಳ್ಳೇ ಪ್ರತಿನಿಧಿಗಳನ್ನು ಆರಿಸಿಕೊಟ್ಟರೆ ನಿಮ್ಮ ಹಿತವಾಗುವದು. ಇಲ್ಲವಾದರೆ ನಿಮ್ಮ ಅಹಿತವನ್ನು ನೀವೇ ಮಾಡಿಕೊಂಡಂತಾಗುವದು. ಆದುದರಿಂದ ಉಂಡಿ, ಅವಲಕ್ಕಿ, ಮೋಟಾರು, ಲಂಚ, ಪಾರ್ಟಿಸ್ಪಿರಿಟು, ಭಿಡೆ ಮೊದಲಾದವುಗಳಿಗೆ ಮರುಳಾಗಿ ಹೇಡಿ ಜನರನ್ನು ಉಂಡ ಮನೆಗೆ ಗಳ ಎಣಿಸುವ ಕ್ಷುಲ್ಲಕ ಜನರನ್ನು ಇನ್ನು ಮುಂದೆ ಆರಿಸುವದಿಲ್ಲೆಂದು ಆಣೆ ಹಾಕಿಕೊಳ್ಳಿರಿ. ಎಂದರೆ ಮಾತ್ರ ನಿಮ್ಮ ಉದ್ಧಾರವಾಗುವದು.

ಮತಕೊಡುವ ಅಧಿಕಾರವೆಂದರೇನೆಂಬುವದಂತೂ ನಿಮಗೆ ಗೊತ್ತೇ ಇದೆ. ಆಸ್ತಿಯು ಇಷ್ಟಿದ್ದರೆ ಮಾತ್ರ ಮತಕೊಡುವ ಹಕ್ಕು ಪ್ರಾಪ್ತವಾಗುತ್ತದೆಂದು ನಿಶ್ಚಯಿಸಿದ್ದಾರೆ. ಆ ಆಸ್ತಿಯು ತೀರಕಡಿಮೆಯೆಂದರೆ ಎಷ್ಟಿರಬೇಕೆಂಬುವದು ಆ ಆ ಪ್ರಾಂತಗಳ ಸ್ಥಿತಿಗತಿಗಳ ಮೇಲೆ ಅವಲಂಬಿಸಿರುವದು. ಇಂತಹ ಆಸ್ತಿಯುಳ್ಳ ಜನರ ಯಾದಿಯನ್ನು ನಿಮ್ಮ ನಿಮ್ಮ ಊರುಗಳ ಗೌಡಕುಲಕರ್ಣಿಯರು ಸಿದ್ಧಪಡಿಸುತ್ತಾರೆ. ಅದರಲ್ಲಿ ಹೆಂಗಸರ ಹೆಸರೂ ಇರಬಹುದೆಂಬದು ನಿಮಗೆ ಗೊತ್ತಿದೆ. ಎಂದರೆ ಮತಕೊಡುವ ಅಧಿಕಾರವು ಗಂಡಸರಿಗೂ ಇದೆ, ಹೆಂಗಸರಿಗೂ ಇದೆ ಎಂದು ಇದರ ಅರ್ಥವು.

ಪ್ರಾಂತಿಕ ಸರಕಾರಕ್ಕೆ ಬಹುಶಃ ತಾಲೂಕಿ-ಗೊಬ್ಬನಂತೆ ಪ್ರತಿನಿಧಿಗಳನ್ನು ಆರಿಸಿ ಕಳಿಸಬೇಕಾಗುವದು. ನಿಮ್ಮ ತಾಲೂಕಿನ ಮತಕೊಡುವ ಜನರೆಲ್ಲ ಕೂಡಿ ಯಾವನನ್ನು ಆರಿಸುವರೋ, ಅವನೇ ಪ್ರಾಂತಿಕ ಸರಕಾರದ ಸಭಾಸದನಾಗುವನು. ಆದುದರಿಂದಲೇ ನೀವು ಇಂತಹನನ್ನು ಆರಿಸುವಾಗ ಬಲು ಜಾಗರೂಕರಾಗಿರಬೇಕೆಂದು ಮೇಲೆ ಹೇಳಿದ್ದೇನೆ.

ಹೀಗೆ ತಾಲೂಕಿ-ಗೊಬ್ಬನಂತೆ ಆರಿಸಿಬಂದ ಜನರೆಲ್ಲ ಕೂಡಿದರೆ ಪ್ರಾಂತಿಕ ಸಭೆಯಾಗುವದು. ಅಲ್ಲಿ ಒಟ್ಟಾರೆ ಸುಮಾರು ೨೦೦ ಜನರಾಗ

ತರೆಂದು ತಿಳಿಯಬಹುದು. ಅವರೆಲ್ಲರೂ ಕೂಡಿ ಬಹುಮತದಿಂದ ಒಬ್ಬ ಸಭಾಪತಿಯನ್ನೂ, ೮-೧೦ ಮಂತ್ರಿಗಳನ್ನೂ ಆರಿಸುವರು. ಸಭಾಪತಿಯೆಂದರೇ ಅಧ್ಯಕ್ಷನ್ನು, ಅಧ್ಯಕ್ಷನೂ, ಮಂತ್ರಿಮಂಡಳವೂ ಕೂಡಿ ಪ್ರಾಂತಿಕ ಸರಕಾರವಾಗುತ್ತದೆ. ಇವರೆಲ್ಲರೂ ಪ್ರಾಂತಿಕಸಭೆಗೆ ಸಮ್ಮತವಾಗುವಂತೆ ಕೆಲಸ ಮಾಡಬೇಕಾಗುತ್ತದೆ. ಅಧ್ಯಕ್ಷನಾಗಲಿ ಮಂತ್ರಿಗಳಾಗಲಿ ಮಾಡುವ ಕೆಲಸವು ಸಭೆಯವರ ಮನಸಿಗೆ ಬರದಿದ್ದರೆ, ಅಧ್ಯಕ್ಷನನ್ನೂ ಮಂತ್ರಿಗಳನ್ನೂ ಕಿತ್ತೊಗೆಯುವ ಅಧಿಕಾರವು ಈ ಸಭೆಯವರಿಗೆ ಇರಬೇಕಾಗುತ್ತದೆ. ಇವರೆಲ್ಲರಮೇಲೆ 'ಗವರ್ನರ' ನೆಂಬ ಸರಕಾರೀ ಅಧಿಕಾರಸ್ಥನಿರುತ್ತಾನೆ. ಅವರನ್ನು ಇಂಗ್ಲಂಡದ ಅರಸರೇ ನಿಯಮಿಸುತ್ತಾರೆ. ಅವನು ಪಾರ್ಲಿಮೆಂಟಿಗೆ ಮಾತ್ರ ಜವಾಬದಾರ ನಾಗಿರುತಾನೆ. ಆದರೂ ನಮ್ಮ ಪ್ರತಿನಿಧಿಗಳ ಸಭೆಯ ಅಭಿಪ್ರಾಯಗಳಿಗೆ ಮಾನ ಕೊಡಬೇಕಾಗುತ್ತದೆ. ಕೆಲಕೆಲವು ಬಾಬುಗಳಲ್ಲಿ ಮಾತ್ರ ಗವರ್ನರನು ತನ್ನ ಮನಸಿಗೆ ಬಂದಂತೆ ನಡೆಯಬಹುದು.

ಸಭೆಯ ಪ್ರತಿನಿಧಿಗಳನ್ನು ಮೂರು ಅಥವಾ ಐದು ವರುಷಗಳಿಗೊಮ್ಮೆ ಆರಿಸಬೇಕಾಗುತ್ತದೆ.

ಇದು ಸ್ವಲ್ಪದರಲ್ಲಿ ಪ್ರಾಂತಿಕ ಸರಕಾರದ ರಚನೆಯಾಯಿತು. ಇನ್ನು ನಡುವಿನ ಸರಕಾರದ ಘಟನೆಯೇನಿರುವದೆಂಬದನ್ನು ಮುಂದಿನ ಭಾಗದಲ್ಲಿ ನೋಡುವ!

## ೪.

ಸ್ವತಂತ್ರವಾದ ಕೆಲವು ಪ್ರಾಂತಗಳು ಕೂಡಿ ಒಕ್ಕಟ್ಟಿನ ರಾಜ್ಯವಾಗುವದೆಂದು ಮೇಲೆ ಹೇಳಿದೆನು. ಆದರೆ ಅವು ಹೀಗೆ ಕೂಡುವದೆಂದರೇನೆಂಬದನ್ನು ಇನ್ನು ನೋಡುವ!

ನಮ್ಮ ನಾಡಿನಲ್ಲಿ ಎರಡು ಭಾಗಗಳು: ಒಂದು ಬ್ರಿಟಿಶರ ಕೈಯೊಳಗಿರುವದು. ಇನ್ನೊಂದು ಸಂಸ್ಥಾನಿಕರ ಕೈಯೊಳಗಿರುವದು. ಸಾಂಗಲಿ, ಜಮಖಂಡಿ, ಕೊಲ್ಹಾಪೂರ, ರಾಮದುರ್ಗ, ಮುಧೋಳ, ಮೈಸೂರ, ಹೈದರಾಬಾದ ಮೊದಲಾದ ಸಂಸ್ಥಾನಗಳೆಂದರೇನೆಂಬುವದು ನಿಮಗೆ ಗೊತ್ತಿದೆ. ಎಂದರೆ ಅವೆಲ್ಲ ನಮ್ಮ ದೇಶದಲ್ಲಿಯೇ ಹುಟ್ಟಿ ಬೆಳೆದ

ಸಂಸ್ಥಾನಿಕರ ಆಸ್ತಿಗಳಾಗಿವೆ. ಆಯಾ ಸಂಸ್ಥಾನದ ಒಳವ್ಯವಸ್ಥೆಯನ್ನು ಆಯಾ ಸಂಸ್ಥಾನಿಕನು ತನ್ನ ಮನಸ್ಸಿಗೆ ಬಂದಂತೆ ಮಾಡುತ್ತಾನೆ. ಈ ಬಾಬುಗಳಲ್ಲಿ ನೀನು ಹೀಗೆಯೇ ಏಕೆ ಮಾಡುವಿ? ಎಂದು ಅವನನ್ನು ಯಾರೂ ಕೇಳುವಂತಿಲ್ಲ. ಆದರೆ ಬ್ರಿಟಿಶರ ಮೇಲಧಿಕಾರಕ್ಕೆ ಈ ಸಂಸ್ಥಾನಿಕರು ಒಳಪಟ್ಟಿರುವದರಿಂದ ಇವರಿಗೆ ಮಾಂಡಲಿಕರೆಂದು ಕರೆಯುವರು.

ಇನ್ನು ಮುಂದೆ ಇವೆರಡೂ ಭಾಗಗಳೂ ಕೂಡಿ 'ಸಂಯುಕ್ತ ಹಿಂದುಸ್ತಾನ' ಅಥವಾ 'ದೊಡ್ಡ ಹಿಂದುಸ್ತಾನ' ವಾಗುವದು. ಬ್ರಿಟಿಶ ಹಿಂದುಸ್ತಾನದೊಳಗಿನ ಮುಂಬಯಿ, ಮದ್ರಾಸ ಮೊದಲಾದ ಪ್ರಾಂತಗಳು, ಸಂಸ್ಥಾನೀ ಹಿಂದುಸ್ತಾನದೊಳಗಿನ ಪ್ರಾಂತಗಳೂ ಕೂಡಿ, ಒಕ್ಕಟ್ಟಿನ 'ರಾಜ್ಯಪದ್ಧತಿಯು ರೂಢಿಯಲ್ಲಿ ಬರತಕ್ಕದ್ದಿದೆ. ಇದು ಬಹು ಮಹತ್ವದ ಮಾತು. ಇಷ್ಟು ದಿನಗಳ ವರೆಗೆ ಸಂಸ್ಥಾನದೊಳಗಿನ ಪ್ರಜೆಗಳಿಗೂ, ಮತ್ತು ಬ್ರಿಟಿಶ ರಾಜ್ಯದೊಳಗಿರುವ ನಮಗೂ ವಿಶೇಷ ಸಂಬಂಧ ವಿರಲಿಲ್ಲ. ಇದರಿಂದ ರಾಜ್ಯಕಾರಭಾರಕ್ಕೆ ವಿಶೇಷ ತೊಂದರೆಯುಂಟಾಗುತ್ತಿತ್ತು. ಆದರೆ ಇನ್ನು ಮುಂದೆ ಸಂಸ್ಥಾನಿಕರೂ ಕೂಡ ತಾವು ಒಕ್ಕಟ್ಟಿನ ರಾಜ್ಯಪದ್ಧತಿಗೆ ಒಳಪಡುವೆವೆಂದೂ, ಒಕ್ಕಟ್ಟಿನ ಸಭೆಯಲ್ಲಿ ಪಾಸಾದ ನಿಯಮಗಳಿಗೆ ಅನುಸರಿಸಿ ನಡೆಯುವೆವೆಂದೂ ಒಪ್ಪಿಕೊಂಡಿದ್ದಾರೆ. ಇದು ಸಂಸ್ಥಾನಿಕರಿಗೆ ಬಹು ಭೂಷಣವಾದ ಮಾತೇ ಸರಿ. ಎಂದರೆ ತಮ್ಮ ಹಕ್ಕುಗಳಲ್ಲಿ ಕೆಲವನ್ನು ಬಿಟ್ಟು ಕೊಟ್ಟು 'ಸಂಯುಕ್ತ ಹಿಂದುಸ್ತಾನ'ಕ್ಕೆ ಹಿತವಾಗುವಂತೆ ಅವರೂ ನಡೆಯಲಿಕ್ಕೆ ಸಿದ್ಧರಾಗಿರುವರೆಂದು ಇದರ ಅರ್ಥವು. ಎಂದಮೇಲೆ ಇಡೀ ಹಿಂದುಸ್ತಾನದ ಹಿತವು ಇದರಿಂದ ಹೆಚ್ಚಿ, ನಮ್ಮನಮ್ಮೊಳಗಿನ ಸ್ನೇಹವು ಬೆಳೆದು, ರಾಜ್ಯದಾಡಳಿತವು ಸುಸೂತ್ರವಾಗಿ ಸಾಗಿ, ಎಲ್ಲರಿಗೂ ಕಲ್ಯಾಣವಾಗುವದೆಂಬದರಲ್ಲಿ ಸಂಶಯವಿಲ್ಲ.

ತಂಮತಂಮಷ್ಟಕ್ಕೆ ಹಿರಿಯರಾದ ಕೆಲವು ಜನ ಗೆಳೆಯರು ಕೂಡಿ ಸಂಘವೊಂದನ್ನು ತೆರೆದು, ಅಧ್ಯಕ್ಷನನ್ನು ಆರಿಸಿ, ಎಲ್ಲರಿಗೂ ಲಾಭವಾಗುವಂತೆ ಕೆಲಸ ಮಾಡಬಹುದೆಂಬದು ನಿಮಗೆ ಗೊತ್ತಿದೆ. ನೀವು 'ಕಂಪನಿ' ಅಂಗಡಿಗಳ ಹೆಸರನ್ನು ಕೇಳಿರಬಹುದು. ಇವೆಲ್ಲ ಇದೇ ಮಾದರಿಯವು.

ಆದರೆ ಹೀಗೆ ಸಂಘ ಮಾಡಬೇಕಾದರೆ, ನೀವು ಮೊದಲು ಕೆಲವು ಸಂಘದ ನಿಯಮಗಳನ್ನು ಗೊತ್ತುಪಡಿಸಬೇಕಾಗುವದು. ಮತ್ತು ಆ ಸಂಘಕ್ಕೆ ಮೆಂಬರರಾದವರೆಲ್ಲ ಆ ನಿಯಮಗಳನ್ನು ಅನುಸರಿಸಲೇ ಬೇಕಾಗುವದು. ಎಂದರೆ ಅವರೆಲ್ಲ ತಾವಾಗಿಯೇ ಕೆಲವು ವಿಶಿಷ್ಟ ನಿಯಮಗಳಿಗೆ ಒಳಗಾಗಬೇಕಾಗುವದು. ಇದರ ಅರ್ಥವೇನೆಂದರೆ:—ಎಲ್ಲ ಮೆಂಬರರೂ ತಮ್ಮ ಸ್ವಾತಂತ್ರ್ಯದ ಕೆಲಭಾಗವನ್ನು ಸಂಘಕ್ಕಾಗಿ ಧಾರೆಯೆರೆಯುವರು, ಮನಬಂದಂತೆ ನಡೆಯಬಹುದಾದ ಅವರು ತಮ್ಮ ಸ್ವೈರವೃತ್ತಿಗೆ ಬೇಕೆಂತಲೇ ಕೆಲವು ವಿಶಿಷ್ಟ ಬಂಧನಗಳನ್ನು ಹಾಕಿಕೊಳ್ಳುವರು, ಮತ್ತು ಇದರಿಂದಲೇ ಸಂಘದ ಒಕ್ಕಟ್ಟು ಬೆಳೆಯುವದು; ಮೆಂಬರರ ಹಿತವೂ ಕಲ್ಯಾಣವೂ ಆಗುವದು; ಮತ್ತು ಒಟ್ಟಿನ ಮೇಲಿಂದ ಆ ಸಂಘದ ಉನ್ನತಿಯಾಗಿ ಎಲ್ಲರಿಗೂ ಲಾಭವಾಗುವದು.

111392

ಬ್ರಿಟಿಶ ಹಿಂದುಸ್ತಾನದೊಳಗಿನ ಪ್ರಾಂತಗಳೂ, ಸಂಸ್ಥಾನೀ ಹಿಂದುಸ್ತಾನದೊಳಗಿನ ಪ್ರಾಂತಗಳೂ ಕೂಡಿ ಒಕ್ಕಟ್ಟಿನ ರಾಜ್ಯವಾಗುವದೆಂದರೆ, ಹೀಗೆ ಸ್ವತಂತ್ರರಾದ ಕೆಲವು ಗೆಳೆಯರು ಕೂಡಿ ಸಂಘವನ್ನು ಏರ್ಪಡಿಸಿದಂತೆಯೇ. ಸಂಘವೆಂದರೇ ಒಕ್ಕಟ್ಟೆಂದು ಅರ್ಥ. ಒಕ್ಕಟ್ಟು ಮಾಡುವದಾದರೂ ಎಲ್ಲರ ಹಿತಕ್ಕಾಗಿಯೇ ಸರಿ. ಆದರೆ ಸಂಘಕ್ಕೆ ಕೆಲವು ನಿಯಮಗಳನ್ನು ಮಾಡುವಂತೆ, ಒಕ್ಕಟ್ಟಿಗಾಗಿಯೂ ಕೆಲವು ನಿಯಮಗಳನ್ನು ಮಾಡಬೇಕಾಗುತ್ತದೆ. ಈ ನಿಯಮಗಳನ್ನು ಎಲ್ಲ ಪ್ರಾಂತಗಳೂ ಪಾಲಿಸಲೇ ಬೇಕು. ಎಂದರೆ ಎಲ್ಲ ಪ್ರಾಂತಗಳೂ ಆ ನಿಯಮಕ್ಕೆ ಅಧೀನವು. ಇಷ್ಟರ ಮಟ್ಟಿಗೆ ಆ ಪ್ರಾಂತಗಳ ಸ್ವಾತಂತ್ರ್ಯವು ಕಡಮೆಯಾದಂತೆಯೇ ಸರಿ. ಆದರೂ ಇದು ದೇಶ ಕಲ್ಯಾಣಕ್ಕೆ ಅವಶ್ಯವೆಂದು ಬೇರೆ ಹೇಳಬೇಕಾಗಿಲ್ಲ.

ಉದಾಹರಣೆಗಾಗಿ ರೇಲ್ವೇಖಾತೆಯನ್ನು ತೆಗೆದುಕೊಳ್ಳಿರಿ. ಚಿಕ್ಕ ಚಿಕ್ಕ ಪ್ರಾಂತಗಳಲ್ಲಿ ಇದರದೊಂದು ಬೇರೆ ಖಾತೆಯನ್ನೇ ಏರ್ಪಡಿಸಿದರೆ ಖರ್ಚುಹೆಚ್ಚು ಬರುವದು; ಮತ್ತು ಜನರಿಗೂ ತ್ರಾಸವಾಗುವದು. ಮುಂಬಯಿಯವರು ಮದ್ರಾಸಕ್ಕೆ ಹೋಗಬೇಕಾದರೆ ಎರಡೂ ಪ್ರಾಂತಗಳಲ್ಲಿ ಒಂದೇ ತರದ ರೇಲ್ವೆ ವ್ಯವಸ್ಥೆಯಿದ್ದರೆ ನೆಟ್ಟಗಾಗುವದಿಲ್ಲವೆ? ಹೀಗೆ

ಇದೇ ಹಿಂದೂ ನಾಡಿನಲ್ಲಿ ಒಂದೇ ರೇಲ್ವೆ ಪದ್ಧತಿಯಿದ್ದರೆ, ನಮಗೆಲ್ಲರಿಗೂ ಹೆಚ್ಚು ಲಾಭವಾಗುವದೆಂಬುದು ಸಹಜವಿದೆ. ಹೀಗೆಯೇ ತಾರಿನ ಖಾತೆಯು. ನಮ್ಮ ದೇಶದ ಒಂದು ತುದಿಯಿಂದ ಮತ್ತೊಂದು ತುದಿಗೆ ತಾರು ಮಾಡಬೇಕಾದರೆ ಒಂದೇ ತಾರಿನ ಖಾತೆಯಿರುವದು ಅವಶ್ಯವಿದೆ. ಎಂದರೆ ಮಾತ್ರ ಸುದ್ದಿಯನ್ನು ಕೂಡಲೇ ಕಳಿಸಲಿಕ್ಕೆ ಬರುವದು. ಇಲ್ಲವಾದರೆ ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ, ಅಲ್ಲಿಂದ ಇನ್ನೊಂದು ಪ್ರಾಂತಕ್ಕೆ—ಹೀಗೆ ಹೆಚ್ಚು ವೇಳೆಯು ಹಿಡಿದು, ಎಲ್ಲ ಪ್ರಾಂತದವರಿಗೆ ಕೆಲಸವಾದರೂ ಹೆಚ್ಚಾಗುವದು. ಪೋಸ್ಟಿನ ಖಾತೆಯು ಮಾತಾದರೂ ಇದೇ. ಹಾಗೆಯೇ ಹಿಂದೂ ದೇಶದ ಆರ್ಥಿಕಖಾತೆ, ಹಡಗುಪಡೆ, ಸೈನ್ಯ, ಅಂತರ್ ರಾಷ್ಟ್ರೀಯವ್ಯವಸ್ಥೆ, ಪರರಾಷ್ಟ್ರೀಯ ವ್ಯವಸ್ಥೆ ಮೊದಲಾದವುಗಳೆಲ್ಲವುಗಳ ಮಾತು. ಆದುದರಿಂದ ಈ ವಿಷಯಗಳೆಲ್ಲ ಆ ಆ ಪ್ರಾಂತಿಕ ಸರಕಾರದ ಕೈಯೊಳಗೆ ಉಳಿಯಬಾರದೆಂಬುದು ಸ್ಪಷ್ಟವಿದೆ. ಎಂತೆಯೇ ಇವಕ್ಕೆ ಒಕ್ಕಟ್ಟಿನ (Federal) ವಿಷಯಗಳೆಂದು ಹೆಸರು ಕೊಟ್ಟು ಇವನ್ನು ನಡುವಿನ ಸರಕಾರದವರ ಕೈಯೊಳಗೆ ಕೊಡಬೇಕಾಗುವದು. ಈ ವಿಷಯಗಳನ್ನೆಲ್ಲ ನಡುವಿನ ಸರಕಾರದವರು ನಡಿಸುವದೇ ದೇಶಕ್ಕೆ ಹಿತವು. ಆದರೆ ಇವುಗಳ ಮೇಲಿರುವ ಪ್ರಾಂತಿಕ ಸರಕಾರದ ಅಧಿಕಾರವೆಂದರೆ ಸ್ವಾತಂತ್ರ್ಯವು ಅಷ್ಟರ ಮಟ್ಟಿಗೆ ನಷ್ಟವಾದಂತಾಗಲಿಲ್ಲವೇ?

ನಡುವಿನ, ಎಂದರೆ ಒಕ್ಕಟ್ಟಿನ ಸರಕಾರದಲ್ಲಿ ಎರಡು ಸಭೆಗಳಾಗುವದು. ಒಂದು ಪ್ರಜಾಪ್ರತಿನಿಧಿಗಳ ಸಭೆ, ಇನ್ನೊಂದು ಪ್ರಾಂತಿಕ ಸರಕಾರದವರು ಆರಿಸಿ ಕಳಿಸಿದ ಪ್ರತಿನಿಧಿಗಳ ಸಭೆ.

ನೀವೇ ಪ್ರಜೆಗಳು. ನೀವು ಆರಿಸಿ ಕಳಿಸಿದ ಪ್ರತಿನಿಧಿಗಳು ಪ್ರಜಾಪ್ರತಿನಿಧಿಗಳು. ಈಗ ನೀವು 'ಅಸೆಂಬ್ಲಿ'ಗೆ ಆರಿಸಿ ಕಳಿಸುವರಲ್ಲ! ಹಾಗೆಯೇ ಇನ್ನು ಮುಂದೆಯೂ ನಡುವಿನ ಸರಕಾರಕ್ಕೆ ನಿಮ್ಮ ಜನರನ್ನು ಆರಿಸಬೇಕಾಗುವದು. ಅದಕ್ಕೂ ಕೂಡ ಇಷ್ಟಿಷ್ಟು ಆಸ್ತಿಯಿದ್ದವನೇ ಮತಕೊಡಬಹುದೆಂದು ನಿರ್ಣಯಿಸುವದು. ಆದರೆ ಮತಕೊಡುವ ಅಧಿಕಾರವು ಹೆಂಗಸರಿಗೂ ಇರುವದು; ಗಂಡಸರಿಗೂ ಇರುವದು. ಅವರ ವಯಸ್ಸು ಮಾತ್ರ ಹದಿನೆಂಟರ ಮೇಲಿರಬೇಕು. ಇನ್ನು ಪ್ರಾಂತಿಕ ಸರಕಾರಕ್ಕೆ

ತಾಲೂಕೆ-ಗೊಬ್ಬನನ್ನಾರಿಸುವಂತೆ, ಈ ಸಭೆಗೆ ಜಿಲ್ಹೆಗೊಬ್ಬನನ್ನು ಆರಿಸ ಬೇಕಾಗಬಹುದು. ಹಿಂದುಸ್ಥಾನದಲ್ಲಿ ಒಟ್ಟಿಗೆ ೩೦೦—೩೫೦ ಜಿಲ್ಹೆಗಳಿವೆ. ಎಂದರೆ ನಿಮ್ಮ ಪ್ರಜಾಪ್ರತಿನಿಧಿಗಳು ಒಟ್ಟಿಗೆ ಸುಮಾರು ೩೫೦ ಜನರಾಗುವರು. ಅವರ ಕೈಯಲ್ಲಿಯೇ ಒಕ್ಕಟ್ಟಿನ ರಾಜ್ಯಪದ್ಧತಿಯು ಉಳಿಯುವದು. ಆದುದರಿಂದ ಆ ಜನರನ್ನು ಆರಿಸಬೇಕಾದರಂತೂ ನೀವು ಬಹಳೇ ಜಾಗರೂಕರಾಗಿರಬೇಕು. ಕೆಟ್ಟ ಜನರನ್ನು ಆರಿಸಿ ಕಳಿಸುವದೆಂದರೆ ನಿಮ್ಮ ಕಾಲಮೇಲೆ ನೀವೇ ಕಲ್ಲು ಚಪ್ಪಿಕೊಂಡಂತೆಯೇ ಸರಿ!

ಪ್ರಜಾಪ್ರತಿನಿಧಿಗಳ ಸಭೆಗೆ ಕೆಳಗಿನ ಸಭೆಯೆಂತಲೂ ಎನ್ನುವದುಂಟು. ಏಕೆಂದರೆ ಇದರಲ್ಲಿ ಪಾಸಾದ ಬಿಲ್ಲುಗಳು, ಇದರ ಮೇಲಿರುವ ಸಭೆಯಲ್ಲಿ ಪಾಸಾಗ ಬೇಕಾಗುವವು. ಎಂದರೆ ಮಾತ್ರ ಅವು ಕಾಯಿದೆಗಳಾಗುವವು. ಆ ಮೇಲಿನ ಸಭೆಗೇ ಪ್ರಾಂತಿಕ ಸರಕಾರಗಳು ತಮ್ಮ ಪ್ರತಿನಿಧಿಗಳನ್ನು ಕಳುಹಿಸಿ ಕೊಡುವವು. ಆ ಆ ಸರಕಾರದವರು ಸುಮಾರು ಏಳೆಂಟು ಪ್ರತಿನಿಧಿಗಳನ್ನು ಕಳಿಸುವರೆಂದು ತಿಳಿದರೆ, ಒಟ್ಟಿಗೆ ಈ ಸಭೆಯಲ್ಲಿ ೧೦೦—೧೨೫ ಜನರಾಗಬಹುದು. ಆದರೆ ಇವರನ್ನು ಆರಿಸುವ ಅಧಿಕಾರವು ನಿಮ್ಮ ಕೈಯೊಳಗಿರುವದಿಲ್ಲ. ಆ ಆ ಸರಕಾರವು ತನ್ನ ಮನಸಿಗೆ ಬಂದ ಜನರನ್ನು ಆರಿಸಿ ಕಳಿಸಬಹುದು.

ಕೆಳಗಿನ ಸಭೆಗೂ ಅಧ್ಯಕ್ಷನಿರುವನು; ಮೇಲಿನ ಸಭೆಗೂ ಅಧ್ಯಕ್ಷನಿರುವನು. ಆ ಅಧ್ಯಕ್ಷನನ್ನು ಆ ಆ ಸಭಾಸದರೇ ಆರಿಸಿಕೊಳ್ಳುವರು. ಮತ್ತು ಮೇಲೆ ಹೇಳಿದಂತೆ ಒಕ್ಕಟ್ಟಿನ ಖಾತೆಗಳನ್ನಾಳಲಿಕ್ಕೆ 'ಕ್ಯಾಬಿನೆಟ್' ಎಂದರೆ 'ಪ್ರಧಾನಮಂಡಲ'ವೇ ಇರುವದು. ಪ್ರಧಾನರನ್ನೂ ಸಭಾಸದರೇ ಆರಿಸುವರು. ಇವರೆಲ್ಲರ ಮೇಲೆ ಈಗಿನಂತೆಯೇ ಗವರ್ನರ ಜನರಲ್ಲನು ಅಥವಾ ವೈಸರಾಯನಿರುವನು. ಅವನು ನಮಗೆ ಹೊಣೆಗಾರನಲ್ಲ. ಪಾರ್ಲಿಮೆಂಟಿಗೆ ಮಾತ್ರ ಅವನು ಆಧೀನನು. ಆದರೆ ಬಹ್ವಂಶಗಳಲ್ಲಿ ಅವನೂ ಕೂಡ ಕೆಳಗಿನ ಸಭೆಯವರು ಹೇಳಿದ ಮಾತನ್ನೇ ನಡಿಸಬೇಕಾಗುವದು. ಮತ್ತು ಇದಕ್ಕೇ ಜವಾಬದಾರೀ ಅಥವಾ ಹೊಣೆಗಾರ ರಾಜ್ಯಪದ್ಧತಿಯೆನ್ನುವರು. ಮಹಾತ್ಮರು ಬಡಿದಾಡಿದ ಸ್ವಾತಂತ್ರ್ಯವ

ಶಿರುಳಾದರು ಇದೇ. ಇಷ್ಟು ದಿನಗಳವರೆಗೆ ವೈಸರಾಯನು ಮನಬಂದಂತೆ ನಡೆಯಬಹುದಾಗಿತ್ತು. ಇನ್ನು ಮುಂದೆ ಅವನು ಹೀಗೆ ನಡೆಯಲಾರ ನೆಂಬದೇ ಇದೆಲ್ಲದರ ಅರ್ಥವು.

ಸಂಸ್ಥಾನಗಳಿಂದ ಈ ಮೇಲಿನ ಮತ್ತು ಕೆಳಗಿನ ಸಭೆಗಳಿಗೆ ಪ್ರತಿನಿಧಿಗಳನ್ನು ಹೇಗೆ ಆರಿಸಿ ಕಳಿಸುವರು? ಎಂದು ನೀವು ಕೇಳಬಹುದು. ಇಲ್ಲಿಯಂತೆಯೇ ಅಲ್ಲಿಯ ಪ್ರಜೆಗಳು ಅವರನ್ನು ಆರಿಸುವರೋ, ಅಥವಾ ಸಂಸ್ಥಾನಿಕರೇ ಅವರನ್ನು ಆರಿಸುವರೋ ಎಂದು ನೀವು ವಿಚಾರಿಸಬಹುದು. ಆದರೆ ಈ ಮಾತು ಪೂರ್ಣವಾಗಿ ನಿಶ್ಚಿತವಾಗಿಲ್ಲ. ಎಲ್ಲಿಯೇ ಆಗಲಿ; ಪ್ರಜೆಗಳು ತಮ್ಮ ಪ್ರತಿನಿಧಿಗಳನ್ನು ಆರಿಸಿ ಕಳಿಸಬೇಕೆಂಬುವದು ಸ್ಪಷ್ಟವಾದ ಮಾತು. ಎಂದರೆ ಮಾತ್ರ ಪ್ರಜೆಗಳ ಕೈಯಲ್ಲಿ ಅಧಿಕಾರ ಬಂದಂತಾಗುವದು.

## ೫.

ಪ್ರತಿಯೊಂದು ಸ್ವತಂತ್ರ ರಾಷ್ಟ್ರದ ರಾಜ್ಯವ್ಯವಸ್ಥೆಯಲ್ಲಿ ಮೂರು ಮುಖ್ಯ ಅಂಗಗಳಿರುವವು. ನಿಯಮಗಳನ್ನು ವಿಧಿಸುವವರು, ಎಂದರೆ ಎಲ್ಲ ದೇಶಕ್ಕೆ ಹಿತವಾಗುವಂತೆ ಕಾಯಿದೆಗಳನ್ನು ಪಾಸು ಮಾಡುವವರು, ಮೊದಲನೆಯ ಅಂಗವು. ಇಲ್ಲಿ ಪ್ರಜೆಗಳ ಪ್ರತಿನಿಧಿಗಳು ಬಹು ಮತದಲ್ಲಿರಬೇಕಾಗುವದು. ಎಂದರೆ ಮಾತ್ರ ಪ್ರಜೆಗಳಿಗೆ ಸ್ವತಂತ್ರತೆಯು ಸಿಕ್ಕಿರುವದೆಂದು ಹೇಳಬಹುದು. ಆದರೆ ಬರೇ ಕಾಯಿದೆಗಳನ್ನು ಪಾಸು ಮಾಡಿದರೆ ನಡೆಯಲಾರದು. ಅವುಗಳನ್ನು 'ಅಮಲಿ'ನಲ್ಲಿ ತರುವ ಕೆಲವು ಅಧಿಕಾರಸ್ಥರು ಇರಬೇಕಾಗುವದು. ಗೌಡ ಕುಲಕರ್ಣಿಯರು, ಮಾಮಲೇದಾರ, ಕಲೆಕ್ಟರ, ಕಮಿಶನರ ಇವರೇ ಮೊದಲಾದವರು ಹೀಗೆ ಕಾಯದೆಗಳನ್ನು ಅಮಲಿನಲ್ಲಿ ತರುವವರು. ಎಂದರೆ ಕಾಯಿದೆಗಳನ್ನು ಯಾರು ಮುರಿಯುವರೋ ಅವರ ವಿಚಾರಣೆ ಮಾಡಿ, ಅವರಿಗೆ ತಕ್ಕ ಶಿಕ್ಷೆಯನ್ನು ಕೊಡುವ ಕೆಲಸವು ಇಂತವರಿಗೆ ಒಪ್ಪಿಸಲ್ಪಟ್ಟಿರುತ್ತದೆ. ರಾಜ್ಯವ್ಯವಸ್ಥೆಯೊಳಗಿನ ಈ ಎರಡನೆಯ ಅಂಗಕ್ಕೆ 'ಕಾರ್ಯವಾಹಕ' ಅಥವಾ 'ಕಾರ್ಯಕಾರೀ' ಎಂದು ಕರೆಯುವದುಂಟು. ಈ ಕಾರ್ಯವಾಹಕ ಮಂಡಲವು, ಮೇಲೆ ವಿವರಿಸಿದ ನ್ಯಾಯವಿಧಾಯಕ ಸಭೆಯ ಅಂಕಿತದೊಳಗಿದ್ದರೆ ಮಾತ್ರ, ಆ ನಾಡಿನಲ್ಲಿ ಪ್ರಜೆಗಳ ಹಿತನಾಗುವದೆಂದು ತಿಳಿಯ

ಬೇಕು. ಹಾಗಾಗದೆ ಇಂತಹ ಅಧಿಕಾರಸ್ಥರು ಮನಬಂದಂತೆ ನಡೆಯು
ಹತ್ತಿದರೆ ತೀರಿಯೇ ಹೋಯಿತು. ಬರೀ ಒಳ್ಳೇ ಕಾಯಿದೆಗಳನ್ನು ಪಾಸು
ಮಾಡುತ್ತ ಹೋಗುವದರಿಂದ ಲಾಭವೇನೂ ಇಲ್ಲ. ಅವುಗಳನ್ನು ರೂಢಿ
ಯಲ್ಲಿ ತರುವದೇ ಮುಖ್ಯ ಮಾತು. ಇನ್ನು ರಾಜ್ಯಾಂಗದ ಮೂರನೆಯ
ಭಾಗವಾದ 'ನ್ಯಾಯ ನಿರ್ಣಾಯಕ' ಕೋರ್ಟುಗಳು. ಇವುಗಳಲ್ಲಿ ನ್ಯಾಯಾ
ಧೀಶರು ನ್ಯಾಯಾನ್ಯಾಯಗಳನ್ನು ವಿಚಾರಿಸಿ, ಎಲ್ಲರಿಗೂ ನ್ಯಾಯದೊರೆ
ಯುವಂತೆ ಮಾಡುವರು. 'ಕಾರ್ಯವಾಹಕ' ಜನರು ಏನಾದರೊಂದು
ಅಲ್ಲದ ಕೆಲಸವನ್ನು ಮಾಡಿದರೆ, ಅವರನ್ನು ಬೈಲಿಗೆಳೆದು, ಅವರಿಗೆ ತಕ್ಕ
ಶಿಕ್ಷೆಯನ್ನು ಕೊಡುವ ಅಧಿಕಾರವು ಈ ಕೊರ್ಟುಗಳಿಗಿರುವದು. ಆದು
ದರಿಂದ ಈ ಕೊರ್ಟುಗಳು ಪೂರ್ಣವಾಗಿ ಸ್ವತಂತ್ರವಾಗಿರ ಬೇಕಾಗುವದು.
ಹಾಗಿರದೆ, ಕೊರ್ಟಿನೊಳಗಿನ ನ್ಯಾಯಾಧೀಶರು 'ಕಾರ್ಯವಾಹಕ'ದವರ
ಅಂಕಿತಕ್ಕೆ ಒಳಗಾದರೆ, ಪ್ರಜೆಗಳ ಹಿತವಾಗುವದು ಶಕ್ಯವೇ ಇಲ್ಲ.
ಕಾರ್ಯವಾಹಕದವರೇ ನ್ಯಾಯನಿರ್ಣಾಯಕ ಕೊರ್ಟುಗಳಿಗೆ ಅಂಜುತ್ತಿರ
ಬೇಕು. ಸಾರಾಂಶವೆಂದರೆ:—ಮೊದಲನೆಯ ಅಂಗದಲ್ಲಿ ಪ್ರಜೆಗಳ ಬಹು
ಮತವೂ. ಮೂರನೆಯದರಲ್ಲಿ ಸ್ವತಂತ್ರವಾಗಿ ನಿರ್ಭಿಡೆಯಿಂದ ಕೆಲಸ
ಮಾಡುವ ನ್ಯಾಯಾಧೀಶರೂ ಇದ್ದು, ಎರಡನೆಯದರಲ್ಲಿ, ಹೇಳಿದಂತೆ ಕೇಳುವ
'ಕಾರ್ಯವಾಹಕ' ಜನರಿರಬೇಕು. ಎಂದರೆ ರಾಜ್ಯಶಕಟವು ಪ್ರಜೆಗಳಿಗೆ
ಹಿತವಾಗುವ ಮಾರ್ಗದಿಂದ ನಡೆದಿದೆಯೆಂದು ಹೇಳಬಹುದು.

ಈ ಮೂರೂ ಅಂಗಗಳು ಪ್ರಾಂತಿಕ ಸರಕಾರದಲ್ಲಿಯೂ ಇರುವವು;
ನಡುವಿನ ಸರಕಾರದವರಲ್ಲಿಯೂ ಇರುವವು. ಪ್ರಾಂತಪ್ರಾಂತಗಳೊಳಗಿನ
ಕಾಯಿದೇಶೀರ ಬಡಿದಾಟವನ್ನೂ, ಒಕ್ಕಟ್ಟಿನ ಸರಕಾರ ಮತ್ತು
ಪ್ರಾಂತಿಕ ಸರಕಾರಗಳೊಳಗಿನ ಬಡಿದಾಟವನ್ನೂ, ನಿರ್ಣಯಿಸುವ ಕಡೆಯ
ಅಧಿಕಾರವು ಒಕ್ಕಟ್ಟಿನ ಮುಖ್ಯ ಕೊರ್ಟಿಗೇ ಇರುವದು. ಆದುದರಿಂದ
ಅಲ್ಲಂತೂ ತೀರ ನಿಸ್ಪೃಹರು, ಪೂರ್ಣಸ್ವತಂತ್ರರು, ಆದ ಜನರಿರಬೇಕಾಗುವ
ದೆಂಬದನ್ನು ಬೇರೆ ಹೇಳಬೇಕೇ?

ಓಂ ತತ್‌ಸತ್ ಬ್ರಹ್ಮಾರ್ಪಣಮಸ್ತು.

ಇದೇ ಲೇಖಕರಿಂದ ಬರೆಯಲ್ಪಟ್ಟ ಪ್ರೌಢ ಗ್ರಂಥವು.

# ವಿಕಾಸವಾದ

ಅಥವಾ,

# ದೇವರು ಸತ್ತನೇ ?

ಅಧುನಿಕ ಹೊಸ ಹೊಸ ಶಾಸ್ತ್ರೀಯ ಶೋಧಗಳು ಮನುಷ್ಯನ ಮನಸ್ಸನ್ನು ತಲ್ಲಣಿಸಿ ದೇವರನ್ನೇ ಮೂಲೆ ಗುಂಪಾಗಿ ಮಾಡಲೆಳಿಸಿವೆ. ಅವನ್ನೆಲ್ಲ ಚನ್ನಾಗಿ ವಿಚಾರಿಸಿ ದೇವರ ಅಸ್ತಿತ್ವವನ್ನು ಮನಗಾಣಿಸಿ ಕೊಡುವ ಉತ್ಕೃಷ್ಟ ಪುಸ್ತಕವು.

ಪ್ರತಿಯೊಂದು ಪುಟದಲ್ಲಿಯೂ ಹೊಸ ವಿಚಾರಗಳಿವೆ. ಪ್ರತಿಯೊಂದು ಸಾಲಿನಲ್ಲಿಯೂ ಶಾಸ್ತ್ರೀಯ ಶೋಧಗಳ ಉಲ್ಲೇಖವಿದೆ. ಚರ್ಚೆಯಿದೆ, ಒಟ್ಟಿನಮೇಲೆ ಇದೊಂದು ಹೊಸ ಸುಧಾರಣೆಯ ಜ್ಞಾನ ಭಾಂಡಾರವೆಂದೇ ಹೇಳಬಹುದು.

ಪುಸ್ತಕ ಸಿಗುವ ಸ್ಥಳ— **ಕುಲಕರ್ಣಿ ನಾರಾಯಣರಾಯರು,**

ಎಮ್. ಎ. ಎಲೆಲ್. ಬಿ. ವಕೀಲ

**ಬೈಲಹೊಂಗಲ.**



